## ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 275
ಸದಸ್ಯರ ಹೆಸರು : ಶ್ರೀಮತಿ ಎಸ್.ವೀಣಾ ಅಚ್ಚಯ್ಯ
(ವಿಧಾನಸಭೆಯಿಂದ ಚುನಾಯಿತರಾದವರು)
ಉತ್ತರಿಸಬೇಕಾದ ದಿನಾಂಕ : 04-03-2020
ಉತ್ತರಿಸುವ ಸಚಿವರು : ಮಾನ್ಯ ಕಂದಾಯ ಸಚಿವರು

| | ಪ್ರಶ್ನೆ | ಉತ್ತರ |
|---|---|---|
| (ಅ) | ಕೊಡಗು ಜಿಲ್ಲೆಯಲ್ಲಿ 2018ರಲ್ಲಿ ಸಂಭವಿಸಿದ ಪ್ರಕೃತಿ ವಿಕೋಪ ಹಾಗೂ ಪ್ರವಾಹದಿಂದಾಗಿ ಮನೆ ಹಾಗೂ ನಿವೇಶನಗಳನ್ನು ಕಳೆದುಕೊಂಡವರಿಗೆ ಪೂರ್ಣ ಪ್ರಮಾಣದಲ್ಲಿ ಪುನರ್ವಸತಿ ಕಲ್ಪಿಸಲಾಗಿದೆಯೇ; | ಸರ್ಕಾರದಿಂದ 2018-19ನೇ ಸಾಲಿನಲ್ಲಿ ಕೊಡಗು ಜಿಲ್ಲೆಯಲ್ಲಿ ಪ್ರವಾಹದಿಂದ ಪೂರ್ಣ/ತೀವ್ರ ಹಾನಿಯಾದ ಮನೆಗಳ ಪೈಕಿ 35 ಮನೆಗಳ ನಿರ್ಮಾಣ ಪೂರ್ಣಗೊಂಡಿದ್ದು, ಸಂತ್ರಸ್ಥರಿಗೆ ಹಸ್ತಾಂತರಗೊಳಿಸಲಾಗಿದೆ, 464 ಮನೆ ನಿರ್ಮಾಣ ಕಾರ್ಯ ಪೂರ್ಣಗೊಂಡಿದ್ದು, ಅರ್ಹ ಸಂತ್ರಸ್ಥರಿಗೆ ಹಸ್ತಾಂತರಗೊಳಿಸಲು ಸಿದ್ದವಾಗಿರುತ್ತವೆ. ಉಳಿದಂತೆ, 181 ಮನೆಗಳು ತಳಪಾಯ ಹಂತ, 31 ಮನೆಗಳು ಲಿಂಟ್ಲ್ ಹಂತ ಹಾಗೂ 91 ಮನೆಗಳ ನಿರ್ಮಾಣ ಪ್ರಾರಂಭಿಸಬೇಕಾಗಿರುತ್ತದೆ. 65 ಸಂತ್ರಸ್ಥ ಫಲಾನುಭವಿಗಳಿಗೆ ಅವರ ಸ್ವಸ್ಥಳದಲ್ಲಿ ಮನೆ ನಿರ್ಮಾಣ ಮಾಡಿಕೊಳ್ಳಲು ತಲಾ ರೂ.9.65 ಲಕ್ಷದಂತೆ ನಾಲ್ಕು ಹಂತದಲ್ಲಿ ಅನುದಾನ ಬಿಡುಗಡೆ ಮಾಡಲಾಗಿದೆ. ಒಟ್ಟು 867 ವಾಸದ ಮನೆಗಳಿಗೆ ಪುನರ್ವಸತಿ ಕಲ್ಪಿಸಲಾಗಿದೆ.<br><br>ಮನೆ ನಿರ್ಮಾಣವಾಗುವವರೆಗೆ ಮಾಸಿಕ ರೂ.10,000/- ದಂತೆ ಬಾಡಿಗೆ ಮೊತ್ತವನ್ನು ಪಾವತಿಸಲಾಗಿದೆ. |
| (ಆ) | ಕಲ್ಪಿಸದಿದ್ದಲ್ಲಿ ಪುನರ್ವಸತಿ ಕಲ್ಪಿಸಬೇಕಾಗಿದ್ದವರ ಸಂಖ್ಯೆ ಎಷ್ಟು; (ತಾಲ್ಲೂಕುವಾರು, ಗ್ರಾಮವಾರು ನಿರಾಶ್ರಿತರಾದವರ ಹೆಸರು ಹಾಗೂ ಪ್ರತಿ ನಿರಾಶ್ರಿತರಿಗೆ ದೊರೆತಿರುವ ಪರಿಹಾರದ ವಿವರ ನೀಡುವುದು) | ಉದ್ಭವಿಸುವುದಿಲ್ಲ. |
| (ಇ) | ಈ ದುರಂತದಲ್ಲಿ ಮನೆ ಹಾಗೂ ನಿವೇಶನ ಕಳೆದುಕೊಂಡ ಎಲ್ಲಾ ಕುಟುಂಬಗಳಿಗೆ ಪರಿಹಾರ ವ್ಯವಸ್ಥೆ ಕಲ್ಪಿಸಲಾಗಿದೆಯೇ? | ಹೌದು. |

ಕಂಇ 99 ಟಿಎನ್ಆರ್ 2020

(ಆರ್. ಅಶೋಕ)
ಕಂದಾಯ ಸಚಿವರು